12

## ಬೆಳಿಗ್ಗೆ ಮತ್ತು ಸಂಜೆ ಹೇಳುವ

# ಝಿಕ್ರ್‌ಗಳು




مدرسة الصفة الإسلامية

**MADRASATU SUFFAH AL ISLAMIYYA**

SKYWAY COMPLEX, 6TH BLOCK, KRISHNAPURA,
SURATKAL, MANGALORE - 575 014
PH: 0824-2271449 MOB: 8722695551

﴿ ٱللَّهُ لَآ إِلَٰهَ إِلَّا هُوَ ٱلْحَىُّ ٱلْقَيُّومُ ۚ لَا تَأْخُذُهُۥ سِنَةٌ وَلَا نَوْمٌ ۚ لَّهُۥ مَا فِى ٱلسَّمَٰوَٰتِ وَمَا فِى ٱلْأَرْضِ ۗ مَن ذَا ٱلَّذِى يَشْفَعُ عِندَهُۥٓ إِلَّا بِإِذْنِهِۦ ۚ يَعْلَمُ مَا بَيْنَ أَيْدِيهِمْ وَمَا خَلْفَهُمْ ۖ وَلَا يُحِيطُونَ بِشَىْءٍ مِّنْ عِلْمِهِۦٓ إِلَّا بِمَا شَآءَ ۚ وَسِعَ كُرْسِيُّهُ ٱلسَّمَٰوَٰتِ وَٱلْأَرْضَ ۖ وَلَا يَـُٔودُهُۥ حِفْظُهُمَا ۚ وَهُوَ ٱلْعَلِىُّ ٱلْعَظِيمُ ﴿٢٥٥﴾ ﴾

"ಅಲ್ಲಾಹು. ಅವನ ಹೊರತು ಅನ್ಯ ಸತ್ಯ ಆರಾಧ್ಯರಿಲ್ಲ. ಅವನು ನಿರಂತರ ಜೀವಿಸುವವನು. ಸ್ವಯಂ ಅಸ್ತಿತ್ವದಲ್ಲಿರುವವನು ಮತ್ತು ಇತರೆಲ್ಲವನ್ನೂ ಸಂರಕ್ಷಿಸಿ ನಿಯಂತ್ರಿಸುವವನು. ತೂಕಡಿಕೆಯೋ ನಿದ್ದೆಯೋ ಅವನನ್ನು ಹಿಡಿದುಕೊಳ್ಳುವುದಿಲ್ಲ. ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವುದೆಲ್ಲವೂ ಅವನದ್ದು. ಅವನ ಅಪ್ಪಣೆಯಿಲ್ಲದೆ ಅವನ ಬಳಿ ಶಿಫಾರಸು ಮಾಡುವವರು ಯಾರು?

ಅವರಿಗೆ ಈಗಾಗಲೇ ಸಂಭವಿಸಿರುವುದನ್ನು ಮತ್ತು ಮುಂದೆ ಸಂಭವಿಸಲಿರುವುದನ್ನು ಅವನು ಅರಿಯುತ್ತಾನೆ. ಅವನು ಇಚ್ಛಿಸಿದ್ದನ್ನು ಹೊರತು ಅವನ ಜ್ಞಾನದಿಂದ ಏನನ್ನೂ ಸೂಕ್ಷ್ಮವಾಗಿ ಅರಿಯಲು ಅವರಿಗೆ ಸಾಧ್ಯವಿಲ್ಲ. ಅವನ ಕುರ್ಸೀ ಭೂಮ್ಯಾಕಾಶಗಳನ್ನು ಆವರಿಸಿಕೊಂಡಿದೆ. ಅವುಗಳನ್ನು ಸಂರಕ್ಷಿಸುವುದು ಅವನಿಗೆ ಭಾರವಿರುವ ಸಂಗತಿಯೇ ಅಲ್ಲ. ಅವನು ಅತ್ಯುನ್ನತನೂ ಮಹಾನನೂ ಆಗಿದ್ದಾನೆ." (ಬೆಳಿಗ್ಗೆ ಮತ್ತು ಸಂಜೆ ಒಂದು ಸಲ) (ಅಲ್‌ಹಾಕಿಂ)

﴿ بِسْمِ ٱللَّهِ ٱلرَّحْمَٰنِ ٱلرَّحِيمِ ﴾

﴿ قُلْ هُوَ ٱللَّهُ أَحَدٌ ١ ٱللَّهُ ٱلصَّمَدُ
٢ لَمْ يَلِدْ وَلَمْ يُولَدْ ٣ وَلَمْ
يَكُن لَّهُۥ كُفُوًا أَحَدٌۢ ٤ ﴾

﴿بِسۡمِ ٱللَّهِ ٱلرَّحۡمَٰنِ ٱلرَّحِيمِ﴾

﴿قُلۡ أَعُوذُ بِرَبِّ ٱلۡفَلَقِ ١ مِن شَرِّ
مَا خَلَقَ ٢ وَمِن شَرِّ غَاسِقٍ إِذَا وَقَبَ
٣ وَمِن شَرِّ ٱلنَّفَّٰثَٰتِ فِي ٱلۡعُقَدِ
٤ وَمِن شَرِّ حَاسِدٍ إِذَا حَسَدَ ٥﴾

﴿بِسۡمِ ٱللَّهِ ٱلرَّحۡمَٰنِ ٱلرَّحِيمِ﴾

﴿قُلۡ أَعُوذُ بِرَبِّ ٱلنَّاسِ ١ مَلِكِ
ٱلنَّاسِ ٢ إِلَٰهِ ٱلنَّاسِ ٣ مِن
شَرِّ ٱلۡوَسۡوَاسِ ٱلۡخَنَّاسِ ٤ ٱلَّذِي
يُوَسۡوِسُ فِي صُدُورِ ٱلنَّاسِ ٥
مِنَ ٱلۡجِنَّةِ وَٱلنَّاسِ ٦﴾

“ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ. ಹೇಳಿರಿ: ಅವನು ಅಲ್ಲಾಹು ಏಕೈಕನು. ಅವನು ನಿರಪೇಕ್ಷನು. ಸರ್ವವೂ ಅವನನ್ನೇ ಆಶ್ರಯಿಸಿಕೊಂಡಿವೆ. ಅವನಿಗೆ ಯಾವುದೇ ಸಂತತಿಯಿಲ್ಲ. ಅವನು ಯಾರದೇ ಸಂತತಿಯೂ ಅಲ್ಲ. ಅವನಿಗೆ ಸರಿಸಮಾನರಾಗಿ ಯಾರೂ ಇಲ್ಲ.”

“ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ. ಹೇಳಿರಿ: ಪ್ರಭಾತದ ರಬ್ಬಿನಲ್ಲಿ ನಾನು ರಕ್ಷೆ ಬೇಡುತ್ತೇನೆ. ಅವನು ಸೃಷ್ಟಿಸಿದವುಗಳ ಕೆಡುಕಿನಿಂದ. ಇರುಳು ಕವಿಯುವಾಗ ರಾತ್ರಿಯ ಕೆಡುಕಿನಿಂದ. ಗಂಟುಗಳಿಗೆ ಊದುವ ಮಾಟಗಾತಿ ಸ್ತ್ರೀಯರ ಕೆಡುಕಿನಿಂದ. ಅಸೂಯೆಗಾರನು ಅಸೂಯೆಪಡುವಾಗ ಅವನ ಕೆಡುಕಿನಿಂದ.”

“ಪರಮ ದಯಾಮಯನೂ ಕರುಣಾನಿಧಿಯೂ ಆದ

ಅಲ್ಲಾಹನ ನಾಮದಿಂದ. ಹೇಳಿರಿ: ಮನುಷ್ಯರ ರಬ್ಬಿ-ನಲ್ಲಿ, ಮನುಷ್ಯರ ಅಧಿಪತಿಯಲ್ಲಿ ಮತ್ತು ಮನುಷ್ಯರ ಆರಾಧ್ಯನಲ್ಲಿ, ಮನುಷ್ಯರ ಹೃದಯದಲ್ಲಿ ದುರ್ಬೋಧ-ನೆ ಮಾಡುವ ಜಿನ್ನ್‌ಗಳಲ್ಲಿ ಮತ್ತು ಮನುಷ್ಯರಲ್ಲಿ ಸೇರಿದ ಹಿಂದಕ್ಕೆ ಸರಿಯುವ ದುರ್ಬೋಧಕರ ಕೆಡುಕಿನಿಂದ ನಾನು ಸಂರಕ್ಷಣೆ ಬೇಡುತ್ತೇನೆ." (ಬೆಳಿಗ್ಗೆ ಮತ್ತು ಸಂಜೆ ಮೂರು ಸಲ) (ಅಬೂದಾವೂದ್)

أَصْبَحْنَا وَأَصْبَحَ الْمُلْكُ لِلَّهِ، وَالْحَمْدُ لِلَّهِ، لَا إِلَهَ إِلَّا اللَّهُ وَحْدَهُ لَا شَرِيكَ لَهُ، لَهُ الْمُلْكُ وَلَهُ الْحَمْدُ، وَهُوَ عَلَى كُلِّ شَيْءٍ قَدِيرٌ. رَبِّ أَسْأَلُكَ خَيْرَ مَا فِي هَذَا الْيَوْمِ، وَخَيْرَ مَا بَعْدَهُ. وَأَعُوذُ بِكَ مِنْ شَرِّ مَا فِي هَذَا الْيَوْمِ، وَشَرِّ مَا بَعْدَهُ. رَبِّ أَعُوذُ بِكَ مِنَ الْكَسَلِ،

وَسُوءِ الْكِبَرِ، رَبِّ أَعُوذُ بِكَ مِنْ عَذَابٍ فِي النَّارِ، وَعَذَابٍ فِي الْقَبْرِ.

“ಅಲ್ಲಾಹನ ಅನುಗ್ರಹ ಮತ್ತು ಸಂರಕ್ಷಣೆಯೊಂದಿಗೆ ನಾವು ಬೆಳಗನ್ನು ಪ್ರವೇಶಿಸಿದೆವು. ಆಧಿಪತ್ಯಗಳೆಲ್ಲವೂ ಅಲ್ಲಾಹನಿಗೇ ಆಗಿವೆ. (ಸಂಜೆ: “ಅಮ್‌ಸೈನಾ ವಅಮ್ಸಲ್ ಮುಲ್ಕು ಲಿಲ್ಲಾಹ್...” ಎಂದು ಹೇಳಬೇಕು) ಅಲ್ಲಾಹನಿಗೆ ಸರ್ವಸ್ತುತಿ. ಅಲ್ಲಾಹನ ಹೊರತು ಅನ್ಯ ಸತ್ಯ ಆರಾಧ್ಯರಿಲ್ಲ, ಅವನು ಏಕೈಕನು ಮತ್ತು ಸಹಭಾಗಿಗಳಿಲ್ಲದವನು. ಆಧಿಪತ್ಯ ಅವನದ್ದು ಮತ್ತು ಸರ್ವಸ್ತುತಿ ಅವನಿಗೆ. ಅವನು ಎಲ್ಲ ವಿಷಯಗಳಲ್ಲೂ ಸಾಮರ್ಥ್ಯವುಳ್ಳವನು. ಓ ನನ್ನ ರಬ್ಬೇ! ಈ ದಿನದಲ್ಲಿರುವ ಒಳಿತನ್ನು ಮತ್ತು ಈ ದಿನದ ನಂತರದ ದಿನಗಳಲ್ಲಿರುವ ಒಳಿತನ್ನು ನಾನು ನಿನ್ನಲ್ಲಿ ಬೇಡುತ್ತೇನೆ. (ಸಂಜೆ: “ರಬ್ಬಿ ಅಸ್‌ಅಲುಕ ಖೈರ ಮಾ ಫೀ ಹಾಝಿಹಿ ಲ್ಲೈಲತಿ, ವಖೈರ ಮಾ ಬಅ್‌ದಹಾ, ವಅಊಝು ಬಿಕ ಮಿನ್ ಶರ್ರಿ ಮಾ ಫೀ ಹಾಝಿಹಿ

ಲ್ಲೈಲತಿ, ವಶರ್ರಿ ಮಾ ಫೀಹಾ..." ಎಂದು ಹೇಳಬೇಕು.) ಈ ದಿನದಲ್ಲಿರುವ ಕೆಡುಕಿನಿಂದ ಮತ್ತು ಈ ದಿನದ ನಂತರದ ದಿನಗಳಲ್ಲಿರುವ ಕೆಡುಕಿನಿಂದ ನಾನು ನಿನ್ನ-ಲ್ಲಿ ರಕ್ಷೆ ಬೇಡುತ್ತೇನೆ. ಓ ನನ್ನ ರಬ್ಬೇ! ಸೋಮಾರಿತನ-ದಿಂದ ಮತ್ತು ವೃದ್ಧಾಪ್ಯದ ಕೆಡುಕಿನಿಂದ ನಾನು ನಿನ್ನಲ್ಲಿ ರಕ್ಷೆ ಬೇಡುತ್ತೇನೆ. ಓ ನನ್ನ ರಬ್ಬೇ! ನರಕದಲ್ಲಿರುವ ಶಿಕ್ಷೆ-ಯಿಂದ ಮತ್ತು ಗೋರಿಯಲ್ಲಿರುವ ಶಿಕ್ಷೆಯಿಂದ ನಾನು ನಿನ್ನಲ್ಲಿ ರಕ್ಷೆ ಬೇಡುತ್ತೇನೆ." (ಬೆಳಿಗ್ಗೆ ಮತ್ತು ಸಂಜೆ ಒಂದು ಸಲ) (ಮುಸ್ಲಿಂ)

اللَّهُمَّ بِكَ أَصْبَحْنَا، وَبِكَ أَمْسَيْنَا، وَبِكَ نَحْيَا، وَبِكَ نَمُوتُ، وَإِلَيْكَ النُّشُورُ.

"ಓ ಅಲ್ಲಾಹ್! ನಿನ್ನ ಅನುಗ್ರಹ ಮತ್ತು ಸಂರಕ್ಷಣೆಯೊಂ-ದಿಗೆ ನಾವು ಬೆಳಗನ್ನು ಪ್ರವೇಶಿಸಿದೆವು. ನಿನ್ನ ಅನುಗ್ರಹ ಮತ್ತು ಸಂರಕ್ಷಣೆಯೊಂದಿಗೆ ನಾವು ಸಂಜೆಯನ್ನು ಪ್ರವೇ-

ಶಿಸಿದೆವು. ನಿನ್ನ ಅಪ್ಪಣೆಯಿಂದಲೇ ನಾವು ಜೀವಂತವಿರುವುದು. ನಿನ್ನ ಅಪ್ಪಣೆಯಿಂದಲೇ ನಾವು ಮರಣಹೊಂದುವೆವು. ಪುನರುತ್ಥಾನವು ನಿನ್ನ ಕಡೆಗೇ ಆಗಿದೆ." (ಸಂಜೆ: "ಅಲ್ಲಾಹುಮ್ಮ ಬಿಕ ಅಮ್‌ಸೈನಾ, ವಬಿಕ ಅಸ್ಬಹ್‌ನಾ, ವಬಿಕ ನಹ್ಯಾ ವಬಿಕ ನಮೂತು, ವಇಲೈಕಲ್ ಮಸೀರ್" ಎಂದು ಹೇಳಬೇಕು.) (ಬೆಳಿಗ್ಗೆ ಮತ್ತು ಸಂಜೆ ಒಂದು ಸಲ) (ಅತ್ತಿರ್ಮಿದಿ)

اللَّهُمَّ أَنْتَ رَبِّي، لَا إِلَهَ إِلَّا أَنْتَ، خَلَقْتَنِي، وَأَنَا عَبْدُكَ، وَأَنَا عَلَى عَهْدِكَ وَوَعْدِكَ مَا اسْتَطَعْتُ، أَعُوذُ بِكَ مِنْ شَرِّ مَا صَنَعْتُ، أَبُوءُ لَكَ بِنِعْمَتِكَ عَلَيَّ، وَأَبُوءُ بِذَنْبِي فَاغْفِرْ لِي، إِنَّهُ لَا يَغْفِرُ الذُّنُوبَ إِلَّا أَنْتَ.

"ಓ ಅಲ್ಲಾಹ್! ನೀನು ನನ್ನ ರಬ್ಬ್, ನಿನ್ನ ಹೊರತು ಅನ್ಯ

ಸತ್ಯ ಆರಾಧ್ಯರಿಲ್ಲ. ನೀನು ನನ್ನನ್ನು ಸೃಷ್ಟಿಸಿರುವೆ. ನಾನು ನಿನ್ನ ದಾಸ. ನನಗೆ ಸಾಧ್ಯವಾಗುವ ಮಟ್ಟಿಗೆ ನಾನು ನಿನ್ನ ಕರಾರು ಮತ್ತು ವಾಗ್ದಾನವನ್ನು ಪಾಲಿಸುತ್ತಿದ್ದೇನೆ. ನಾನು ಮಾಡಿದ ಕರ್ಮಗಳ ಕೆಡುಕಿನಿಂದ ನಿನ್ನಲ್ಲಿ ರಕ್ಷೆ ಬೇಡು-ತ್ತೇನೆ. ನೀನು ನನಗೆ ಅನುಗ್ರಹಿಸಿದ ಅನುಗ್ರಹಗಳನ್ನು ನಾನು ಒಪ್ಪಿಕೊಳ್ಳುತ್ತೇನೆ. ನನ್ನ ಪಾಪವನ್ನೂ ನಾನು ಒಪ್ಪಿ-ಕೊಳ್ಳುತ್ತೇನೆ. ಆದುದರಿಂದ ನನ್ನನ್ನು ಕ್ಷಮಿಸು. ಖಂಡಿತ-ವಾಗಿಯೂ ನೀನಲ್ಲದೆ ಪಾಪಗಳನ್ನು ಕ್ಷಮಿಸುವವರಿಲ್ಲ.” (ಬೆಳಿಗ್ಗೆ ಮತ್ತು ಸಂಜೆ ಒಂದು ಸಲ) (ಅಲ್‌ಬುಖಾರಿ)

**اللَّٰهُمَّ مَا أَصْبَحَ بِي مِنْ نِعْمَةٍ أَوْ بِأَحَدٍ مِنْ خَلْقِكَ فَمِنْكَ وَحْدَكَ لَا شَرِيكَ لَكَ، فَلَكَ الْحَمْدُ وَلَكَ الشُّكْرُ.**

“ಓ ಅಲ್ಲಾಹ್! ಯಾವ ಅನುಗ್ರಹಗಳೊಂದಿಗೆ ನಾನು ಅಥವಾ ನಿನ್ನ ಯಾವುದೇ ಸೃಷ್ಟಿ ಬೆಳಗನ್ನು ಪ್ರವೇಶಿ-

ಸಿದೆಯೋ ಆ ಅನುಗ್ರಹಗಳೆಲ್ಲವೂ ನಿನ್ನದು ಮಾತ್ರ. ನೀನು ಏಕೈಕನು. ನಿನಗೆ ಯಾವುದೇ ಸಹಭಾಗಿಗಳಿಲ್ಲ. ಆದುದರಿಂದ ಸರ್ವಸ್ತುತಿ ಮತ್ತು ಕೃತಜ್ಞತೆಗಳು ನಿನಗೇ ಮೀಸಲು." (ಸಂಜೆ: "ಅಲ್ಲಾಹುಮ್ಮ ಮಾ ಅಮ್ಸಾ ಬೀ..." ಎಂದು ಹೇಳಬೇಕು.) (ಬೆಳಿಗ್ಗೆ ಮತ್ತು ಸಂಜೆ ಒಂದು ಸಲ) (ಅಬೂದಾವೂದ್)

**اللَّهُمَّ عَافِنِي فِي بَدَنِي، اللَّهُمَّ عَافِنِي فِي سَمْعِي، اللَّهُمَّ عَافِنِي فِي بَصَرِي، لَا إِلَهَ إِلَّا أَنْتَ. اللَّهُمَّ إِنِّي أَعُوذُ بِكَ مِنَ الْكُفْرِ وَالْفَقْرِ، وَأَعُوذُ بِكَ مِنْ عَذَابِ الْقَبْرِ، لَا إِلَهَ إِلَّا أَنْتَ.**

"ಓ ಅಲ್ಲಾಹ್! ನನ್ನ ದೇಹಕ್ಕೆ ಆರೋಗ್ಯ ಕೊಡು. ಓ ಅಲ್ಲಾಹ್! ನನ್ನ ಶ್ರವಣಕ್ಕೆ ಆರೋಗ್ಯ ಕೊಡು. ಓ

ಅಲ್ಲಾಹ್! ನನ್ನ ದೃಷ್ಟಿಗೆ ಆರೋಗ್ಯ ಕೊಡು. ನಿನ್ನ ಹೊರತು ಅನ್ಯ ಸತ್ಯ ಆರಾಧ್ಯರಿಲ್ಲ. ಅವಿಶ್ವಾಸ ಮತ್ತು ಬಡತನದಿಂದ ನಾನು ನಿನ್ನಲ್ಲಿ ರಕ್ಷೆ ಬೇಡುತ್ತೇನೆ. ಗೋರಿ ಶಿಕ್ಷೆಯಿಂದ ನಾನು ನಿನ್ನಲ್ಲಿ ರಕ್ಷೆ ಬೇಡುತ್ತೇನೆ. ನಿನ್ನ ಹೊರತು ಅನ್ಯ ಸತ್ಯ ಆರಾಧ್ಯರಿಲ್ಲ." (ಬೆಳಿಗ್ಗೆ ಮತ್ತು ಸಂಜೆ 3 ಸಲ) (ಅಬೂದಾವೂದ್)

حَسْبِيَ اللَّهُ، لَا إِلَهَ إِلَّا هُوَ، عَلَيْهِ تَوَكَّلْتُ، وَهُوَ رَبُّ الْعَرْشِ الْعَظِيمِ.

"ನನಗೆ ಅಲ್ಲಾಹು ಸಾಕು. ಅವನ ಹೊರತು ಅನ್ಯ ಸತ್ಯ ಆರಾಧ್ಯರಿಲ್ಲ. ನಾನು ಅವನಲ್ಲಿ ಭರವಸೆಯನ್ನಿಟ್ಟಿದ್ದೇನೆ. ಅವನು ಮಹಾ ಸಿಂಹಾಸನದ ಒಡೆಯನಾಗಿದ್ದಾನೆ." (ಬೆಳಿಗ್ಗೆ ಮತ್ತು ಸಂಜೆ 7 ಸಲ) (ಅಬೂದಾವೂದ್)

اللَّهُمَّ إِنِّي أَسْأَلُكَ الْعَفْوَ وَالْعَافِيَةَ فِي الدُّنْيَا

**وَالْآخِرَةِ. اللَّهُمَّ إِنِّي أَسْأَلُكَ الْعَفْوَ وَالْعَافِيَةَ فِي دِينِي وَدُنْيَايَ وَأَهْلِي وَمَالِي. اللَّهُمَّ اسْتُرْ عَوْرَاتِي، وَآمِنْ رَوْعَاتِي، اللَّهُمَّ احْفَظْنِي مِنْ بَيْنِ يَدَيَّ، وَمِنْ خَلْفِي، وَعَنْ يَمِينِي، وَعَنْ شِمَالِي، وَمِنْ فَوْقِي، وَأَعُوذُ بِعَظَمَتِكَ أَنْ أُغْتَالَ مِنْ تَحْتِي.**

“ಓ ಅಲ್ಲಾಹ್! ಇಹಲೋಕದಲ್ಲೂ, ಪರಲೋಕದಲ್ಲೂ ನಾನು ಕ್ಷಮೆ ಮತ್ತು ಸೌಖ್ಯವನ್ನು ಬೇಡುತ್ತೇನೆ. ಓ ಅಲ್ಲಾಹ್! ನನ್ನ ಧರ್ಮದಲ್ಲಿ, ಇಹಲೋಕದಲ್ಲಿ, ಕುಟುಂಬದಲ್ಲಿ ಮತ್ತು ಸಂಪತ್ತಿನಲ್ಲಿ ಕ್ಷಮೆ ಮತ್ತು ಸೌಖ್ಯವನ್ನು ಬೇಡುತ್ತೇನೆ. ಓ ಅಲ್ಲಾಹ್! ನನ್ನ ನ್ಯೂನತೆಗಳನ್ನು ಮರೆಮಾಚು. ನನ್ನ ಭಯವನ್ನು ನಿವಾರಿಸು. ಓ ಅಲ್ಲಾಹ್! ನನ್ನ ಮುಂಭಾಗದಿಂದ, ನನ್ನ ಹಿಂಭಾಗದಿಂದ, ನನ್ನ ಬಲಭಾಗದಿಂದ, ನನ್ನ ಎಡಭಾಗದಿಂದ,

ನನ್ನ ಮೇಲ್ಭಾಗದಿಂದ ನನ್ನನ್ನು ರಕ್ಷಿಸು. ಭೂಮಿ ನನ್ನನ್ನು ನುಂಗಿ ಬಿಡುವುದರಿಂದ ನಾನು ನಿನ್ನ ಮಹಾತ್ಮೆಯ ಮೂಲಕ ನಿನ್ನಲ್ಲಿ ರಕ್ಷೆ ಬೇಡುತ್ತೇನೆ." (ಬೆಳಿಗ್ಗೆ ಮತ್ತು ಸಂಜೆ ಒಂದು ಸಲ) (ಅಬೂದಾವೂದ್)

**بِسْمِ اللَّهِ الَّذِي لَا يَضُرُّ مَعَ اسْمِهِ شَيْءٌ فِي الْأَرْضِ وَلَا فِي السَّمَاءِ، وَهُوَ السَّمِيعُ الْعَلِيمُ.**

"ಯಾರ ಹೆಸರಿನೊಂದಿಗೆ ಭೂಮಿಯಲ್ಲಾಗಲಿ, ಆಕಾಶದಲ್ಲಾಗಲಿ ಯಾವುದೇ ವಸ್ತು ಹಾನಿ ಮಾಡುವುದಿಲ್ಲವೋ ಆ ಅಲ್ಲಾಹನ ಹೆಸರಿನಿಂದ. ಅವನು ಎಲ್ಲವನ್ನು ಕೇಳುವವನೂ ಅರಿಯುವವನೂ ಆಗಿದ್ದಾನೆ." (ಬೆಳಿಗ್ಗೆ ಮತ್ತು ಸಂಜೆ 3 ಸಲ) (ಅಬೂದಾವೂದ್)

**رَضِيتُ بِاللَّهِ رَبًّا، وَبِالْإِسْلَامِ دِينًا، وَبِمُحَمَّدٍ**

رَسُولًا.

“ರಬ್ಬ್ ಆಗಿ ಅಲ್ಲಾಹನಲ್ಲಿ, ಧರ್ಮವಾಗಿ ಇಸ್ಲಾಮಿನಲ್ಲಿ ಮತ್ತು ಪ್ರವಾದಿಯಾಗಿ ಮುಹಮ್ಮದ್(ﷺ) ರಲ್ಲಿ ನನಗೆ ತೃಪ್ತಿಯಿದೆ.” (ಬೆಳಿಗ್ಗೆ ಮತ್ತು ಸಂಜೆ 3 ಸಲ) (ಅಹ್ಮದ್)

سُبْحَانَ اللَّهِ وَبِحَمْدِهِ.

“ಅಲ್ಲಾಹು ಸಕಲ ನ್ಯೂನತೆಗಳಿಂದಲೂ ಪರಿಶುದ್ಧನು. ಅವನ ಸ್ತುತಿಯೊಂದಿಗೆ.” (ಬೆಳಿಗ್ಗೆ ಮತ್ತು ಸಂಜೆ 100 ಸಲ) (ಮುಸ್ಲಿಮ್)

لَا إِلَهَ إِلَّا اللَّهُ وَحْدَه لَا شَرِيكَ لَهُ، لَهُ الْمُلْكُ وَلَهُ الْحَمْدُ، وَهُوَ عَلَى كُلِّ شَيْءٍ قَدِيرٌ.

“ಅಲ್ಲಾಹನ ಹೊರತು ಅನ್ಯ ಸತ್ಯ ಆರಾಧ್ಯರಿಲ್ಲ. ಅವನು ಏಕೈಕನು. ಅವನಿಗೆ ಯಾವುದೇ ಸಹಭಾಗಿಗಳಿಲ್ಲ. ಆಧಿ-

ಪತ್ಯ ಅವನದ್ದು ಮತ್ತು ಸರ್ವಸ್ತುತಿ ಅವನಿಗೆ. ಅವನು ಎಲ್ಲ ವಿಷಯಗಳಲ್ಲೂ ಸಾಮರ್ಥ್ಯವುಳ್ಳವನು." (ಬೆಳಿಗ್ಗೆ 100 ಸಲ) (ಅಲ್‌ಬುಖಾರಿ)

**سُبْحَانَ اللَّهِ وَبِحَمْدِهِ، عَدَدَ خَلْقِهِ، وَرِضَا نَفْسِهِ، وَزِنَةَ عَرْشِهِ، وَمِدَادَ كَلِمَاتِهِ.**

"ಅಲ್ಲಾಹು ಸಕಲ ನ್ಯೂನತೆಗಳಿಂದಲೂ ಪರಿಶುದ್ಧನು. ಅವನ ಸ್ತುತಿಯೊಂದಿಗೆ. ಅವನ ಸೃಷ್ಟಿಗಳ ಸಂಖ್ಯೆಯಷ್ಟು. ಅವನ ತೃಪ್ತಿಯಷ್ಟು. ಅವನ ಸಿಂಹಾಸನದ ಭಾರದಷ್ಟು. ಅವನ ವಚನಗಳ ಮಸಿಯಷ್ಟು." (ಬೆಳಿಗ್ಗೆ 3 ಸಲ) (ಮುಸ್ಲಿಮ್)

**اللَّهُمَّ إِنِّي أَسْأَلُكَ عِلْمًا نَافِعًا، وَرِزْقًا طَيِّبًا، وَعَمَلًا مُتَقَبَّلًا.**

“ಓ ಅಲ್ಲಾಹ್! ನಾನು ನಿನ್ನಲ್ಲಿ ಪ್ರಯೋಜನಕಾರಿ ಜ್ಞಾನ-ವನ್ನು, ಶುದ್ಧವಾದ ಆಹಾರವನ್ನು ಮತ್ತು ಸ್ವೀಕೃತವಾದ ಕರ್ಮಗಳನ್ನು ಬೇಡುತ್ತೇನೆ.” (ಬೆಳಿಗ್ಗೆ ಒಂದು ಸಲ) (ಇಬ್ನ್ ಮಾಜ)

أَسْتَغْفِرُ اللَّهَ وَأَتُوبُ إِلَيْهِ.

“ನಾನು ಅಲ್ಲಾಹನಲ್ಲಿ ಕ್ಷಮೆಯಾಚಿಸುತ್ತಾ ಅವನ ಕಡೆಗೆ ಪಶ್ಚಾತ್ತಾಪಪಟ್ಟು ಮರಳುತ್ತೇನೆ.” (ಪ್ರತಿದಿನ 100 ಸಲ) (ಅಲ್‌ಬುಖಾರಿ)

أَعُوذُ بِكَلِمَاتِ اللَّهِ التَّامَّاتِ مِنْ شَرِّ مَا خَلَقَ.

“ಅಲ್ಲಾಹನ ಪರಿಪೂರ್ಣ ವಚನಗಳೊಂದಿಗೆ ಅವನು ಸೃಷ್ಟಿಸಿದವುಗಳ ಕೆಡುಕಿನಿಂದ ನಾನು ರಕ್ಷೆ ಬೇಡುತ್ತೇ-ನೆ.” (ಸಂಜೆ 3 ಸಲ) (ಅಹ್ಮದ್)

اللَّهُمَّ صَلِّ وَسَلِّمْ عَلَى نَبِيِّنَا مُحَمَّدٍ.

“ಓ ಅಲ್ಲಾಹ್! ನಮ್ಮ ಪ್ರವಾದಿ ಮುಹಮ್ಮದ್(ﷺ) ರವರ ಮೇಲೆ ಸಲಾತ್ ಮತ್ತು ಸಲಾಮನ್ನು ಸುರಿಸು.” (ಬೆಳಿಗ್ಗೆ ಮತ್ತು ಸಂಜೆ 10 ಸಲ) (ಅತ್ತಬರಾನಿ)

الحركة النصيحة الإسلامية
ANNASEEHA ISLAMIC MOVEMENT
SURATKAL, MANGALORE - 575 014
MOB: 9731593091 / 9945171612

Jamiyathe Ahle Hadees
Mangalore